ಡಾ॥ ಪರಡ್ಡಿ ಮಲ್ಲಿಕಾರ್ಜುನ

# ಸಂಸ್ಕೃತದಲ್ಲಿ ಕರ್ನಾಟಕೇತಿಹಾಸ ಕುರಿತ ಮಹಾಕಾವ್ಯಗಳ ಸಮೀಕ್ಷೆ

ಎ. ಬಿ. ಕೀಥ್ ಅವರು ಪ್ರಾಚೀನ ಭಾರತೀಯರಲ್ಲಿ ಇತಿಹಾಸ ಪ್ರಜ್ಞೆಯೇ ಇರಲಿಲ್ಲವೆಂದು ಅಭಿಪ್ರಾಯ ಪಡುತ್ತಾರೆ. ಇದಕ್ಕೆ ಕಾರಣವನ್ನೂ ಊಹಿಸಬಹುದು. ಪ್ರಾಚೀನ ಭಾರತದಲ್ಲಿ ಇತಿಹಾಸದ ಜೊತೆ ಪೌರಾಣಿಕ ಘಟನೆಗಳು ಎಷ್ಟೊಂದು ಹಾಸುಹೊಕ್ಕಾಗಿ ಬೆರತಿವೆಯೆಂದರೆ ಅದರಲ್ಲಿ ಐತಿಹಾಸಿಕ ಸಂಗತಿಯನ್ನು ಹುಡುಕುವುದು ಇಡೀ ಬೆಟ್ಟವನ್ನು ಅಗೆದು ಒಂದು ಇಲಿಮರಿಯನ್ನು ಹುಡುಕಿ ತೆಗೆಯುವುದಕ್ಕೆ ಸಮಾನವೆನ್ನಬಹುದು. ಆದರೆ ಐತಿಹಾಸಿಕ ಕಾವ್ಯಗಳಲ್ಲಿ ಐತಿಹಾಸಿಕ ಸಂಗತಿಯನ್ನರಿಯಲು ಹೆಚ್ಚಿನ ಶ್ರಮವಾಗುತ್ತಿದ್ದು, ಸಂಸ್ಕೃತ ಕವಿಚರಿತೆಯೂ ಇದಕ್ಕೆ ಹೊರತಲ್ಲ.

ಈ ಅವಸ್ಥೆಗೆ ಅನೇಕ ಕಾರಣಗಳಿದ್ದರೂ, ಭಾರತೀಯರ ಆಧ್ಯಾತ್ಮಿಕ ದೃಷ್ಟಿಕೋಣ (ಕರ್ಮ ಸಿದ್ಧಾಂತ) ಅವುಗಳಲ್ಲೆಲ್ಲಾ ಪ್ರಮುಖ ಕಾರಣವೆನ್ನಲಡ್ಡಿಯಿಲ್ಲ. ಆದರೂ ಐತಿಹಾಸಿಕ ಪ್ರಜ್ಞೆಯೇ ಅವರಲ್ಲಿರಲಿಲ್ಲವೆಂದು ಹೇಳುವುದು ಅಷ್ಟು ಸಮಂಜಸವಾಗಲಾರದು.

ಮಹಾಭಾರತದ ಉಕ್ತಿಯೊಂದು ವೇದ ಪುರಾಣಗಳಲ್ಲಿಯೂ ಐತಿಹಾಸಿಕ ಘಟನಾವಳಿಯ ಉಲ್ಲೇಖವಿರುವುದು ಸೂಚಿಸುತ್ತದೆ. ಪುರಾಣಗಳಂತೂ ಪ್ರಾಚೀನ (ಪ್ರಾಗೈತಿಹಾಸಿಕ) ಭಾರತದ ಐತಿಹ್ಯಗಳ ಖಜಾನೆಯಾಗಿರುವುದನ್ನು ಕಾಣಬಹುದು. ಕಾಳಿದಾಸನ ಮಾಲವಿಕಾಗ್ನಿಮಿತ್ರ, ಬಾಣನ ಹರ್ಷಚರಿತ, ಹರ್ಷನ ರತ್ನಾವಳೀ, ಭಾಸನ ಪ್ರತಿಜ್ಞಾಯೌಗಂಧರಾಯಣ ಮತ್ತು ಸ್ವಪ್ನವಾಸವದತ್ತ ಮುಂತಾದ ಕೃತಿರತ್ನಗಳು ಐತಿಹಾಸಿಕ ಹಿನ್ನೆಲೆಯಲ್ಲಿ ರಚಿತವಾಗಿರುವುದನ್ನು ಮಹಾವಿದ್ವಾಂಸರೇ ಒಪ್ಪುತ್ತಾರೆ.

ಉಪಲಬ್ಧವಿರುವ ಐತಿಹಾಸಿಕ ಮಹಾಕಾವ್ಯಗಳ ವಿಷಯಕ್ಕೆ ಬಂದರೆ, ಮತ್ತೊಂದು ಸಮಸ್ಯೆ ಎದುರಾಗುತ್ತದೆ. ಈ ಮಹಾಕಾವ್ಯಗಳ ಕರ್ತೃಗಳು ಸ್ವಭಾವತಃ ಕವಿ ಹೃದಯದವರಾಗಿರುತ್ತಾರೆ ಅಥವಾ ಕವಿಗಳೆಂದು ಗಣಿಸಲ್ಪಡಲು ಉತ್ಸುಕರಾಗಿರುತ್ತಾರೆ. ಸಾಮಾನ್ಯವಾಗಿ ಈ ಕವಿಗಳು ರಾಜರ ಉದಾರಶ್ರಯದಲ್ಲಿದ್ದೂ ತಮ್ಮ ಕೃತಿಗಳಲ್ಲಿ ಅವರ ಅತಿರಂಜಿತ, ಅತಿಮಾನುಷ ವರ್ಣನೆಯನ್ನು ಮಾಡುವುದು ಸಹಜ.ಹಾಗಾಗಿ ಇಲ್ಲಿ ಉಕ್ತವಾದ ಘಟನೆಗಳೆಲ್ಲವೂ ಐತಿಹಾಸಿಕ ಸತ್ಯದಿಂದ ಕೂಡಿರಲೇಬೇಕೆಂಬ ನಿಯಮವಿಲ್ಲ.

ವಸ್ತುಸ್ಥಿತಿ ಹೀಗಿರುವಾಗ, ಮಹಾಕಾವ್ಯದ ಕರ್ತೃ ನಾಯಕನ ಸಮೀಪದ ಬಂಧುವಾಗಿದ್ದರಂತೂ.ಕೇಳುವುದೇ ಬೇಡ. ಗಂಗಾದೇವಿಯ ಮಧುರಾವಿಜಯವನ್ನು ಇದಕ್ಕೊಂದು ನಿದರ್ಶನವಾಗಿ ಕೊಡಬಹುದು.

ಸಂಸ್ಕೃತವಾಙ್ಮಯದಲ್ಲಿ ಸುಮಾರು ಹನ್ನೊಂದು ಐತಿಹಾಸಿಕ ಮಹಾಕಾವ್ಯಗಳಿದ್ದು, ಅವುಗಳ ಸಂಕ್ಷಿಪ್ತ ಪರಿಚಯವಿಂತಿದೆ :

೧. ಪರಿಮಳ ಪದ್ಮಗುಪ್ತನ ನವಸಾಹಸಾಂಕ ಚರಿತವು ೧೮ ಸರ್ಗಗಳಲ್ಲಿ ಸಿಂಧುರಾಜ (ವಾಕ್ಪತಿರಾಜನ ತಮ್ಮ)ನವಸಾಹಸಾಂಕನು ನಾಗರಾಜಕನ್ಯೆ ಶಶಿಪ್ರಭೆಯನ್ನು ವರಿಸುವ ಪೌರಾಣಿಕ ಹಿನ್ನೆಲೆಯಲ್ಲಿ ಗುಜರಾತದ ಪರಮಾರ ರಾಜವಂಶದ ಇತಿಹಾಸನನ್ನು

ನಿರೂಪಿಸುತ್ತಿದ್ದು, ಕೆಲ ಐತಿಹಾಸಿಕ ಸಂಗತಿಗಳು ಉದಯಾಪುರ ಪ್ರಶಸ್ತಿಯಿಂದ ಪ್ರಮಾಣೀಕರಿಸಲ್ಪಟ್ಟಿವೆ. ಹತ್ತನೆಯ ಶತಮಾನದ ಕೊನೆಯ ಭಾಗ ಮತ್ತು ಹನ್ನೊಂದನೆಯ ಶತಮಾನದ ಪ್ರಾರಂಭದ ಭಾಗದಲ್ಲಿ ಅಂದರೆ ೧೦೦೫ರ ಸುಮಾರಿಗೆ ಈ ಗ್ರಂಥದ ರಚನೆಯಾಗಿರಬಹುದೆಂದು ತಿಳಿದುಬರುತ್ತದೆ.

೨. ಕಲ್ಹಣನ ರಾಜತರಂಗಿಣೀ ಗ್ರಂಥವು ೮ ತರಂಗಗಳಲ್ಲಿ ಕಾಶ್ಮೀರ ದೇಶದ ಪ್ರಾರಂಭದಿಂದ ಹಿಡಿದು ಕವಿಯ ಜೀವಿತ ಕಾಲದವರೆಗಿನ ಇತಿಹಾಸವನ್ನು ನಿರೂಪಿಸುತ್ತದೆ. ೧೨ನೆಯ ಶತಮಾನದ ಪ್ರಾರಂಭದಲ್ಲಿ ಕೃತಿ ರಚನೆಯಾಗಿರಬಹುದು.

೩. ಜಯಾನಕನ ಪೃಥ್ವೀರಾಜವಿಜಯ ಮಹಾಕಾವ್ಯವು ೧೨ ಸರ್ಗಗಳಲ್ಲಿ ೮ ಶತಮಾನದಿಂದ ೧೨ನೆಯ ಶತಮಾನದವರೆಗಿನ ಅಜಮೇರದ ಚೌಹಾನ ದೊರೆಗಳ ಇತಿಹಾಸವನ್ನು ಸಾಮಾನ್ಯವಾಗಿ, ಪೃಥ್ವೀರಾಜ ಚೌಹಾನನ ಇತಿಹಾಸವನ್ನೂ ವಿಶೇಷವಾಗಿ ನಿರೂಪಿಸುತ್ತದೆ. ರಚನಾಕಾಲ ೧೧೯೧–೧೧೯೩.

೪. ಹೇಮಚಂದ್ರಸೂರಿಯ ದ್ವ್ಯಾಶ್ರಯ ಮಹಾಕಾವ್ಯವು ಮೊದಲಿನ ೨೦ ಸರ್ಗಗಳಲ್ಲಿ ಸಂಸ್ಕೃತದಲ್ಲೂ ಉಳಿದ ೮ ಸರ್ಗಗಳಲ್ಲಿ ಪ್ರಾಕೃತದಲ್ಲೂ ರಚಿತವಾಗಿದ್ದು, ಸಂಸ್ಕೃತ ಮತ್ತು ಪ್ರಾಕೃತ ವ್ಯಾಕರಣಗಳ ನಿರೂಪಣೆಯ ಜೊತೆಗೇ ಗುಜರಾತದ ಚಾಲುಕ್ಯ ವಂಶದ ಇತಿಹಾಸದ ಮೇಲೆ ಬೆಳಕು ಚೆಲ್ಲುತ್ತದೆ. ರಚನಾಕಾಲ ೧೨ನೆಯ ಶತಮಾನದ ಉತ್ತರಾರ್ಧ.

೫. ಸೋಮೇಶ್ವರ ದೇವನ ಕೀರ್ತಿಕೌಮುದಿಯು ೯ ಸರ್ಗಗಳಲ್ಲಿ ಗುಜರಾತ ಚಾಲುಕ್ಯವಂಶದ ದೊರೆಗಳ ಮಂತ್ರಿಯಾದ ವಸ್ತುಪಾಲನ ಸ್ತುತಿಯನ್ನು ಮಾಡುತ್ತಿದ್ದು, ರಚನಾ ಕಾಲ ೧೩ನೆಯ ಶತಮಾನದ ಮಧ್ಯಭಾಗವಾಗಿದೆ.

೬. ಅರಿಸಿಂಹನ ಸುಕೃತ ಸಂಕೀರ್ತನವು ೧೦ ಸರ್ಗಗಳಲ್ಲಿ ವೀರಧವಲನ ಹಾಗೂ ಅವನ ಮಗ ವೀಸಲದೇವನ ಮಂತ್ರಿಯಾದ ವಸ್ತುಪಾಲನ ಸ್ತುತಿಪರವಾಗಿದ್ದು, ಕ್ರಿ.ಶ. ೧೨೯ರ ಸುಮಾರಿಗೆ ಇದರ ರಚನೆಯಾಗಿದೆ.

೭. ಬಾಲಚಂದ್ರಸೂರಿಯ ವಸಂತವಿಲಾಸ ೧೪ ಸರ್ಗಗಳಲ್ಲಿ ಅದೇ ವಸ್ತುಪಾಲನ ಸ್ತುತಿಪರವಾಗಿದ್ದು, ೧೩ನೆಯ ಶತಮಾನದ ಅಂತ್ಯ ಹಾಗೂ ೧೪ನೆಯ ಶತಮಾನದ ಪ್ರಾರಂಭದಲ್ಲಿ ರಚನೆಯಾಗಿರಬೇಕು.

೮. ನಯಚಂದ್ರಸೂರಿಯ ಹಮ್ಮೀರಕಾವ್ಯವು ೧೪ ಸರ್ಗಗಳಲ್ಲಿ ಚೌಹಾನ ಅರಸರ, ವಿಶೇಷವಾಗಿ ಹಮ್ಮೀರ ದೊರೆಯ ಇತಿಹಾಸವನ್ನು ನಿರೂಪಿಸುತ್ತಿದ್ದು, ರಚನಾ ಕಾಲ ೧೪೯೪.

೯. ಬಿಲ್ಹಣನ ವಿಕ್ರಮಾಂಕದೇವಚರಿತವು ೧೮ ಸರ್ಗಗಳಲ್ಲಿ ಚಾಲುಕ್ಯ ವಂಶದ ದೊರೆಗಳ, ವಿಶೇಷವಾಗಿ ೬ನೇ ವಿಕ್ರಮಾದಿತ್ಯ ಇತಿಹಾಸವನ್ನು ನಿರೂಪಿಸುತ್ತದೆ. ೧೧ನೆಯ ಶತಮಾನದ ಉತ್ತರಾರ್ಧದಲ್ಲಿ ಇದರ ರಚನೆ.

೧೦. ಗಂಗಾದೇವಿಯ ಮಧುರಾವಿಜಯ ೮ (ಸುಬ್ರಮಣ್ಯ ಶಾಸ್ತ್ರಿಗಳ ಸಂಪಾದನೆಯಲ್ಲಿ ೯) ಸರ್ಗಗಳಲ್ಲಿ ವಿಜಯನಗರ ಇತಿಹಾಸವನ್ನು ನಿರೂಪಿಸುತ್ತದೆ. ೧೪ನೆಯ ಶತಮಾನ.

೧೧. ರಾಜನಾಥ ಡಿಂಡಿಮನ ಸಾಳುವಾಭ್ಯುದಯವು ೧೩ ಸರ್ಗಗಳಲ್ಲಿ ವಿಜಯನಗರ ರಾಜ್ಯದ ಮಾಂಡಲೀಕ ದೊರೆ ಸಾಳುವ ನರಸಿಂಹನ ಐತಿಹ್ಯವನ್ನು ನಿರೂಪಿಸುತ್ತದೆ. ರಚನೆ ಕ್ರಿ. ಶ. ೧೪೮೬ ಪೂರ್ವ.

ಕರ್ನಾಟಕೇತಿಹಾಸವನ್ನು ನಿರೂಪಿಸುವ ಮೂರು ಮಹಾಕಾವ್ಯಗಳೆಂದರೆ :

**೧. ವಿಕ್ರಮಾಂಕದೇವ ಚರಿತಂ :** ಬಾಣನಂತೆ ಬಿಲ್ಹಣನು ತನ್ನ ವಿಷಯವಾಗಿ ಸವಿಸ್ತಾರ ಮಾಹಿತಿಯನ್ನೊದಗಿಸಿದ್ದಾನೆ. ಚಾಲುಕ್ಯ ವಂಶದ ದೊರೆಗಳ ಇತಿ

ಹಾಸವಿಲ್ಲಿ ಲಿಪಿಬದ್ಧವಾಗಿರುವುದನ್ನು ಕಾಣುತ್ತೇವೆಂದರೆ ತಪ್ಪಾಗದು. ಈ ಕೃತಿಯು ಎಲ್ಲಾ ವಿವರಗಳಿಂದ ಆರನೇ ವಿಕ್ರಮಾದಿತ್ಯನು ತನ್ನ ಇಡೀ ಜೀವನವನ್ನು ಯುದ್ಧದಲ್ಲಿಯೇ ಕಳೆದು ರಾಜ್ಯದ ಸೀಮೆಯನ್ನು ವಿಸ್ತರಿಸಿ ಸ್ಥಿರಗೊಳಿಸಿದನೆಂದು ವೇದ್ಯವಾಗುತ್ತದೆ.

**೨. ಮಧುರಾವಿಜಯಂ ಅಥವಾ ವೀರ ಕಂಪರಾಯಚರಿತಂ :** ಕ್ರಿ.ಶ. ೧೩೬೨-೧೩೭೪ರ ಅವಧಿಯಲ್ಲಿ ರಾಜ್ಯವಾಳಿದ ವಿಜಯನಗರ ರಾಜ ಕಂಪಣನ ಮಡದಿ ಗಂಗಾದೇವಿಯು ತನ್ನ ಪತಿಯ ವಿಜಯ ಪರಂಪರೆಯನ್ನಿಲ್ಲಿ ಅತಿರಂಜಿತವಾಗಿ ವರ್ಣಿಸಿದ್ದಾಳೆ.

**೩. ಸಾಳುವಾಭ್ಯುದಯ :** ಅಪ್ರಕಟಿತ ಮಹಾಕಾವ್ಯದ ಕರ್ತೃ ರಾಜನಾಥ ಡಿಂಡಿಮ (ಶ್ರೀ ಅರುಣಗಿರೀಶನ ಪುತ್ರ). ಸಾಳುವ ನರಸಿಂಹನು ಸಂಗಮ ವಂಶದ ದೊರೆಗಳಾದ ಮಲ್ಲಿಕಾರ್ಜುನ, ವಿರೂಪಾಕ್ಷ ಮತ್ತು ಪ್ರೌಢದೇವರಾಯನ ಸಾಮಂತನಾಗಿದ್ದು, ಅಂತಿಮರಾಜನ ದುರ್ಬಲತೆಯಿಂದಾಗಿ ತಾನೇ ರಾಜನಾಗಿರಬಹುದೆಂದು ಊಹಿಸಬಹುದು. ಕ್ರಿ.ಶ. ೧೪೮೦ರ ಸುಮಾರಿಗೆ ಅಥವಾ ಮೊದಲು ಈ ಕೃತಿಯ ರಚನೆಯ ಸಾಧ್ಯತೆಯಿದೆ. ಏಕೆಂದರೆ ಕ್ರಿ.ಶ. ೧೪೮೬ರಲ್ಲಿ ಬರೆಯಲಾಗಿರುವ ನರಸಿಂಹ ಶಿಲಾಲೇಖನದಲ್ಲಿ ರಾಜಾಧಿರಾಜ, ರಾಜಪರಮೇಶ್ವರನೆಂದು ಕರೆಯಲ್ಪಡುವ ನರಸಿಂಹನು ಮೊದಲು ಮಹಾಮಂಡಲೇಶ್ವರ ಎಂಬ ಉಲ್ಲೇಖವನ್ನು ಕಾಣುತ್ತೇವೆ. ನರಸಿಂಹನು ವಿಜಯನಗರವನ್ನು ಆಳಿದ ಉಲ್ಲೇಖ ಕಾವ್ಯದಲ್ಲಿರುವುದಿಲ್ಲ. ಆದುದರಿಂದ ಅವನು ಚಂದ್ರಗಿರಿ (ಬೆಳಗೊಳ)ದಲ್ಲಿ ಮಾಂಡಲೀಕನಾಗಿ ಆಳುತ್ತಿರುವಾಗ ಈ ಮಹಾಕಾವ್ಯದ ರಚನೆಯಾಗಿರಬೇಕು. ದೇವುಲಪಲ್ಲಿ ಎಂಬ ಉಲ್ಲೇಖವನ್ನು ಕಾಣುತ್ತೇವೆ. ಈ ಕಾವ್ಯದಲ್ಲಿ ಸಾಳುವ ನರಸಿಂಹನು ಅನೇಕ ಅಲೌಕಿಕ ಸದ್ಗುಣಗಳ ತವರುಮನೆಯಾಗಿದ್ದನೆಂದು ವರ್ಣಿಸಲಾಗಿದೆ.

ಐತಿಹಾಸಿಕ ಘಟನೆಗಳ ನಿರೂಪಣೆಯ ಜೊತೆ ಜೊತೆಯೇ ಈ ಮಹಾಕಾವ್ಯಗಳಲ್ಲಿ ಆಗಿನ ಕಾಲದ ಸಾಮಾಜಿಕ, ಸಾಂಸ್ಕೃತಿಕ, ರಾಜನೈತಿಕ ಮುಂತಾದ ವಿಷಯಗಳ ಬಗ್ಗೆ ಅಪಾರ ಮಾಹಿತಿಯನ್ನು ಕಾಣಬಹುದು.